## ॥ ಶ್ರೀ ದಿಗ್ವಿಜಯ ರಾಮೋ ವಿಜಯತೆ ॥

ಶ್ರೀ. ಶಾ. ಶಕೆ-೧೯೪೩ ಪ್ಲವ ಸಂವತ್ಸರದ ಶ್ರೀಕೃಷ್ಣಾಷ್ಟಮೀ ನಿರ್ಣಯದ ವಿವರ.

ಶ್ರೀಮದುತ್ತರಾದಿಮಠದ ಪಂಚಾಂಗ [ಸೂರ್ಯಸಿಧ್ಧಾಂತ]ದ ಪ್ರಕಾರ ತಿಥಿ-ನಕ್ಷತ್ರಗಳ ಮಾನಗಳು ಈ ಕೆಳಗಿನಂತಿವೆ.

ದಿನಾಂಕ_ ೨೯/೮/೨೦೨೧ ರವಿವಾರ ಸಪ್ತಮೀ ೩೮[ಘ]. ೪೩[ಪ]. ಕೃತ್ತಿಕಾ ೫೯[ಘ] ೪೪[ಪ].

ದಿನಾಂಕ- ೩೦/೮/೨೦೨೧ ಚಂದ್ರವಾರ ಅಷ್ಟಮೀ ೪೩-ಘ. ೫೪-ಪ. ರೋಹಿಣಿ ೬೦-ಘ ೦೦-ಪ.

ಈ ಸಂದರ್ಭದಲ್ಲಿ ಪ್ರಮಾಣಗಳೊಂದಿಗೆ ಕೆಳಗಿನಂತೆ ವಿಮರ್ಶಿಸಲಾಗಿದೆ.

ಸಂಗ್ರಹ ಮತ್ತು ವಿಮರ್ಶೆ :-ಶ್ರೀವಾದಿರಾಜ.ಭೀಮಾಚಾರ್ಯ.ಕಂಚಿ.
ಮೊ. ೮೩೧೦೩೫೫೮೧೬ ,ಬಾಗಲಕೋಟೆ.

ದಿ- ೨೯/೮/೨೦೨೧ ರವಿವಾರ ಸಪ್ತಮಿ ದಿನ ಅರ್ಧರಾತ್ರಿಯಲ್ಲಿ ಅಷ್ಟಮಿ ಇದ್ದು, ರೋಹಿಣಿ ಇರುವದಿಲ್ಲ. ಮರುದಿನ ಅರ್ಧರಾತ್ರಿಗಿಂತ ಪೂರ್ವದಲ್ಲಿಯೇ, ಅಷ್ಟಮಿ ಮುಗಿದು ಹೋಗಿದ್ದು,ರೋಹಿಣಿ ಮಾತ್ರ ಇರುತ್ತದೆ.

ಕಾರಣ ಅರ್ಧರಾತ್ರಿಗಳೆರಡರಲ್ಲಿಯೂ ತಿಥಿನಕ್ಷತ್ರಗಳೆರಡರ ಸಂಯೋಗವಿರುವದಿಲ್ಲ.

ಕಾರಣ ಇದನ್ನು ಶ್ರೀಕೃಷ್ಣಜಯಂತಿಯೆಂದು ಪರಿಗಣಿಸಲಾಗದು.

ಆದ್ದರಿಂದ ಇದನ್ನು ಶ್ರೀಕೃಷ್ಣಾಷ್ಟಮಿ ಅಥವಾ ಜನ್ಮಾಷ್ಟಮಿಯೆಂದು ಪರಿಗ್ರಹಿಸಬೇಕೆಂದು ಅನೇಕ ಪ್ರಮಾಣಗಳಿರುತ್ತವೆ.

ಅಲ್ಲದೇ ಉಪಲಭ್ದವಿದ್ದ ಸುಮಾರು ೮೦-೮೫ ವರ್ಷಗಳಿಂದ ಇದೇ ರೀತಿಯ ಅನುಷ್ಠಾನ ಮಾಡಿಕೊಂಡು ಬಂದಿರುವ ಪಂಚಾಂಗ ದಾಖಲೆಗಳಿರುತ್ತವೆ.

**ಇದಕ್ಕೆ ಪ್ರಮಾಣಗಳು :**

೧) ರೋಹಿಣ್ಯಾಂ ಅರ್ಧರಾತ್ರೇತು ಯದಾ ಕಾಲಾಷ್ಟಮೀ ಭವೇತ್

ಜಯಂತೀ ನಾಮ ಸಾ ಪ್ರೋಕ್ತಾ ಸರ್ವ ಪಾಪ ಪ್ರಣಾಶಿನೀ ॥

ಯಸ್ಯಾಂ ಜಾತೋ ಹರಿ: ಸಾಕ್ಷಾತ್ ನಿಶೀಥೇ ಭಗವಾನಜ: ।

ಎಂಬುದಾಗಿ, ಶ್ರೀಮದಾನಂದತೀರ್ಥರಿಂದ ರಚಿತವಾದ "ಜಯಂತೀ ಕಲ್ಪ" ದ ಪ್ರಕಾರ, ನಿರವಕಾಶವಾಗಿ ಈ ವರ್ಷ ಜಯಂತಿ ಆಗುವದಿಲ್ಲ. ಕೇವಲ ಕೃಷ್ಣಾಷ್ಟಮೀ ಆಗುತ್ತದೆ.

೨)ಶೃಣಷ್ವ ಅವಹಿತೋ ರಾಜನ್ ಕಥ್ಯಮಾನಂ ಮಯಾಽನಘ ।

ಶ್ರಾವಣಸ್ಯ ಚ ಮಾಸಸ್ಯ ಕೃಷ್ಣಾಷ್ಟಮ್ಯಾಂ ನರಾಧಿಪ ॥

ರೋಹೀಣಿ ಯದಿ ಲಭ್ಯೇತ ಜಯಂತೀ ನಾಮ ಸಾ ತಿಥಿ; ॥

_ಸನತ್ಕುಮಾರ ಸಂಹಿತಾ.

ಶ್ರಾವಣ ಕೃಷ್ಣಾಷ್ಟಮಿಯ ಜೊತೆಗೆ ರೋಹಿಣಿ ನಕ್ಷತ್ರವೂ ದೊರಕಿದರೆ, ಅದು ಜಯಂತಿ ಎನಿಸಿಕೊಳ್ಳುವದು. ಇದರಿಂದಾಗಿ ಕೇವಲ ಕೃಷ್ಣಾಷ್ಟಮಿಯೇ ಬೇರೆ, ಕೃಷ್ಣ ಜಯಂತಿಯೇ ಬೇರೆ. ಎಂದು ತಿಳಿಯಲಾಗಿದೆ.ಅಷ್ಟಮಿ ಎಂದರೇ,ನಿಶೀಥಕಾಲದ ಅಷ್ಟಮೀ ಎಂದೇ ಅರ್ಥ.

೩) ಪ್ರಾಜಾಪತ್ಯೇನ ಸಂಯುಕ್ತಾ ಅಷ್ಟಮೀ ತು ಯದಾ ಭವೇತ್ ।

ಶ್ರಾವಣೇ ಬಹುಲೇ ಸಾ ತು ಸರ್ವಪಾಪ ಪ್ರಣಾಶಿನೀ

ಜಯಂ ಪುಣ್ಯಸ್ಯ ಕುರುತೆ ಜಯಂತೀತ್ಯೇವ ತಾಂ ವಿದು; ॥

_ ಸ್ಕಾಂದ ಪುರಾಣ.

೪) ಕೃಷ್ಣಾಷ್ಟಮ್ಯಾಂ ಭವೇದ್ಯತ್ರ ಕಲೈಕಾ ರೋಹಿಣಿ ಯದಿ ।

ಜಯಂತೀ ನಾಮ ಸಾ ಪ್ರೋಕ್ತಾ ಉಪೋಷ್ಯಾ ಸಾ ಪ್ರಯತ್ನತ:॥

– ಅಗ್ನಿಪುರಾಣ.

ಕೃಷ್ಣಾಷ್ಟಮೀಯೊಡನೆ ಒಂದು ಕಲಾ ರೋಹಿಣಿ ಸಂಯೋಗವಾದರೇ, ಅದು ಜಯಂತೀ ಎನ್ನಿಸಿಕೊಳ್ಳುವದು. ಪ್ರಯತ್ನಪೂರ್ವಕವಾಗಿ ಉಪವಾಸ ಮಾಡಬೇಕು..

೫) ಮಾಸಿ ಭಾದ್ರಪದೇ$ಷ್ಟಮ್ಯಾಂ ನಿಶೀಥೇ ಕೃಷ್ಣಪಕ್ಷಗೆ ।

ಶಶಾಂಕೆ ವೃಷರಾಶಿಸ್ಥೇ ಋಕ್ಷೆ ರೋಹಿಣಿ ಸಂಜ್ಞಕೆ॥

ಯೋಗೆ$ಸ್ಮಿನ್ ವಸುದೇವಾದ್ಧಿ ದೇವಕೀ ಮಾಮಜೀಜನತ್।

ತಸ್ಮಾನ್ಮಾಂ ಪೂಜಯೇತ್ತತ್ರ ಶುಚಿ: ಸಮ್ಯಗುಪೋಷಿತ: ॥

–ಭವಿಷ್ಯೋತ್ತರ ಪುರಾಣೆ

೬) ಉಪೋಷ್ಯ ಜನ್ಮಚಿಹ್ನಾನಿ ಕುರ್ಯಾಜ್ಜಾಗರಣಂ ತು ಯ: ।

ಅರ್ಧರಾತ್ರಿಯುತಾಷ್ಟಮ್ಯಾಂ ಸೋ$ಶ್ವಮೇಧಫಲಂ ಲಭೇತ್ ॥

–ನಾರದೀಯ ಸಂಹಿತಾ.

೭) ರೋಹಿಣೀ ಸಹಿತಾ ಕೃಷ್ಣಾ ಮಾಸಿ ಭಾದ್ರಪದೇ$ಷ್ಟಮೀ ।

ಸಪ್ತಮ್ಯಾಂ ಅರ್ಧರಾತ್ರಾಧ: ಕಲಯಾ$ಪಿ ಯದಾ ಭವೇತ್ ॥

ತತ್ರ ಜಾತೋ ಜಗನ್ನಾಥ: ಕೌಸ್ತುಭೀ ಹರಿರೀಶ್ವರ: ।

ತಮೇವೋಪವಸೇತ್ ಕಾಲಂ ಕುರ್ಯಾತ್ತತ್ರೈವ ಜಾಗರಮ್ ॥

–ವಿಷ್ಣುಧರ್ಮೋತ್ತರ ಪುರಾಣೆ .

ಇಯಮಷ್ಟಮಿ ಕೃಷ್ಣಪಕ್ಷಾದಿ ಮಾಸ ವಿವಕ್ಷಯಾ ಭಾದ್ರಪದೇ ಭವತಿ ।

ಸೈವಾಷ್ಟಮಿ ಶುಕ್ಲಪಕ್ಷಾದಿ ಮಾಸ ವಿವಕ್ಷಯಾ ಶ್ರಾವಣೇ ಭವತಿ.।

೮) ರೋಹಿಣೀ ಸಹಿತಾ ಕೃಷ್ಣಾ ಮಾಸಿ ಚ ಶ್ರಾವಣೇ$ಷ್ಟಮಿ

ಅರ್ಧರಾತ್ರಾದಧಶ್ಚೋರ್ಧ್ವಂ ಕಲಯಾಪಿ ಯದಾ ಭವೇತ್ ।

ಜಯಂತೀ ನಾಮ ಸಾ ಪ್ರೋಕ್ತಾ ಸರ್ವಪಾಪಪ್ರಣಾಶಿನೀ ॥

–ಯೋಗೀಶ್ವರ: ।

೯) ಅರ್ಧರಾತ್ರೇ ತು ಯೋಗೋ$ಯಂ ತಾರಾಪತ್ಯುದಯೇ ತಥಾ ।

ನಿಯತಾತ್ಮಾ ಶುಚಿ: ಸ್ನಾತ: ಪೂಜಾಂ ತತ್ರ ಪ್ರವರ್ತಯೇತ್ ॥

–ವಿಷ್ಣುಧರ್ಮೋತ್ತರೆ ।

೧೦) ಸೋ$ಯಂ ಅರ್ಧರಾತ್ರಯೋಗ: ಮುಖ್ಯ: ಕಲ್ಪ:

ಯತ್ತು ಕೃತ್ಸ್ನ–ಅಹೋರಾತ್ರಯೋಗ; ಸೋ$ಯಂ ಮುಖ್ಯತರ:

ಯಶ್ಚ ಯದಾ ಕದಾಚಿತ್ ಈಷದ್ಯೋಗ: ಸೋ$ನುಕಲ್ಪ:।

ಹೀಗೆ ಅನೇಕ ಪ್ರಮಾಣಗಳಿಂದ ಕೃಷ್ಣಾಷ್ಟಮೀ ಹಾಗೂ ಕೃಷ್ಣ ಜಯಂತಿಗಳ ವಿವರ ಹಾಗೂ ಅವುಗಳಲ್ಲಿಯ ಭೇದಗಳನ್ನು ತಿಳಿಯಬಹುದು.ಪ್ರಧಾನ ಯೋಗ ವಿಲ್ಲದ್ದರಿಂದ ಈ ವರ್ಷ ಜಯಂತೀ ಆಗದೇ ಕೃಷ್ಣಾಷ್ಟಮಿ ಇರುತ್ತದೆ.

## – <u>ಅಥ ಕಾಲನಿರ್ಣಯ;</u> –

**ಸ್ಮೃತಿ ಕೌಸ್ತುಭ (ಸಂವತ್ಸರ ದೀಧಿತಿ) ದಲ್ಲಿ ಹೀಗೆ ಹೇಳಲಾಗಿದೆ.**

ತತ್ರ ಅಷ್ಟಮೀ ದ್ವಿವಿಧಾ । ವಿಧ್ಧಾ ಶುಧ್ಧಾ ಚ । ಅರ್ಧರಾತ್ರಾದರ್ವಾಕ್ ಸಪ್ತಮೀ ವೇಧವತೀ ವಿದ್ಧಾ । ತದ್ರಹಿತಾ ಶುದ್ಧಾ । ನ ಅತ್ರ ಅಷ್ಟಮ್ಯಾ: ತಿಥ್ಯಂತರ ಇವ ದಿವಾ ಸತ್ವಂ ವೇಧತ್ವ ಪ್ರಯೋಜಕಂ । ಉಕ್ತರೀತ್ಯಾ ಸತ್ಯಪಿ ಉಪವಾಸಾದಿ ಪ್ರಾಧಾನ್ಯೆ । ತಸ್ಯಾ; ಅರ್ಧರಾತ್ರೆವ್ಯಾಪ್ತೇರೇವ ಗ್ರಾಹ್ಯತ್ವ ನಿರ್ಣಯ ಹೇತುತ್ವಾತ್ ।

ಇದರ ಭಾವ__ ಇಲ್ಲಿ ಎರಡು ವಿಧವಾದ ಅಷ್ಟಮೀ. ವಿದ್ಧಾಷ್ಟಮಿ ಹಾಗೂ ಶುದ್ಧಾಷ್ಟಮಿಯೆಂದು.

೧) ವಿದ್ಧಾಷ್ಟಮಿ–ಎಂದರೆ ಅರ್ಧರಾತ್ರಿಗಿಂತ ಮುಂಚೆ ಸಪ್ತಮಿ ಇದ್ದು ನಂತರ ಅಷ್ಟಮಿ. ಅದು ಹೇಗೆಂದರೆ ಉದಾ:_ ಸಪ್ತಮಿ ೪೦ ಘ ಇದ್ದು ನಂತರ ಅಷ್ಟಮಿ ಇದ್ದರೆ ಅದು ವಿದ್ಧಾಷ್ಟಮಿ.

೨) ಶುದ್ಧಾಷ್ಟಮಿ ಎಂದರೆ, ಸೂರ್ಯೋದಯದಿಂದಾರಂಭಿಸಿ ಅರ್ಧರಾತ್ರಿಯ ವರೆಗೆ ಅಥವಾ ನಂತರದಲ್ಲಿಯೂ ಅಷ್ಟಮಿ ಇರುವದು.   ಉದಾ:__ಅಷ್ಟಮಿ ೪೮ ಘಟಕಾ.

ಬೇರೆ ತಿಥಿಗಳಂತೆ ವೇಧಕ್ಕೆ ಹಗಲು ಸಪ್ತಮಿ ಇದ್ದು, ನಂತರ ಅಷ್ಟಮಿ ಹೀಗೆ ಅಲ್ಲ. ಆದರೆ ಅರ್ಧ ರಾತ್ರದಲ್ಲಿ ಅಷ್ಟಮಿ ತಿಥಿ ಇರುವದೇ ಗ್ರಾಹ್ಯವೆಂಬುದು ನಿರ್ಣಯಕ್ಕೆ ಹೇತುವಾಗಿರುತ್ತದೆ.ಆದ ಕಾರಣ ಪ್ರಸಕ್ತವರ್ಷದಲ್ಲಿ ಸಪ್ತಮೀ ವೇಧವು ಅಷ್ಟಮಿಗೆ ಇರುವ ಕಾರಣ. ಅರ್ಧರಾತ್ರಿಯಲ್ಲಿ ಅಷ್ಟಮಿ ಯೋಗವು ಪ್ರಧಾನ ಆದ್ದರಿಂದ ಪೂರ್ವವಿದ್ಧವಾದ ಈ ತಿಥಿಯು ಕೃಷ್ಣಾಷ್ಟಮಿಗೆ ಯುಕ್ತವಾದ ತಿಥಿಯು. ಅದರಲ್ಲೂ ರೋಹಿಣಿ ಯೋಗವಿದ್ದಿದ್ದರೆ ಅದು ಜಯಂತಿಗೆ ಪ್ರಧಾನವಾದ ಕಾಲವಾಗುತ್ತದೆ.

## ಯಥಾ$ಹ ವಸಿಷ್ಠ: ।

ಮುಖ್ಯಕಾಲ: ಸವಿಜ್ಞೇಯ; ತತ್ರ ಜಾತೋ ಹರಿ; ಸ್ವಯಮ್ ॥

ಪ್ರಸಕ್ತವರ್ಷದಲ್ಲಿ ಜಯಂತೀ ಪ್ರಯುಕ್ತ ಮುಖ್ಯಕಾಲವು ದೊರೆತಿಲ್ಲವಾದ್ದರಿಂದ, ಇದನ್ನು ಕೃಷ್ಣಾಷ್ಟಮಿ ಅಥವಾ ಜನ್ಮಾಷ್ಟಮಿ ಎಂದು ಪರಿಗಣಿಸಲಾಗಿದೆ._

ಕಾಲ ಮಾಧವೆ – "ಏವಂ ಸತಿ ಅರ್ಧರಾತ್ರಸದ್ಭಾವ ಏವ ಕರ್ಮಕಾಲವ್ಯಾಪ್ತಿ:ಇತ್ಯಭಿಧೀಯತೆ । ತದೇವ ಅಭಿಪ್ರೇತ್ಯ ವಿಷ್ಣುರಹಸ್ಯ ದೃಶ್ಯತೆ ।

ರೋಹಿಣ್ಯಾಂ ಅರ್ಧರಾತ್ರೇತು ಯದಾ ಕೃಷ್ಣಾಷ್ಟಮೀ ಭವೇತ್।
ತಸ್ಯಾಮಭ್ಯರ್ಚನಂ ಶೌರೇ ಹಂತಿ ಪಾಪಂ ತ್ರಿಜನ್ಮಜಮ್ ". ॥

ಕಾಲ ಮಾಧವದಲ್ಲಿ ಮೇಲ್ಕಂಡ ವಿಷ್ಣುರಹಸ್ಯದ ವಾಕ್ಯವನ್ನು ಉದಾಹರಿಸಿ ಅರ್ಧರಾತ್ರಿಯಲ್ಲಿಯೇ ತಿಥ್ಯರ್ಕ್ಷಗಳ ಸದ್ಭಾವವೇ ಜಯಂತಿ ಆಚರಣೆಗೆ " ಕರ್ಮಕಾಲ ವ್ಯಾಪ್ತಿ"ಯೆಂಬುದಾಗಿ ತಿಳಿಸಲಾಗಿದೆ.

ಪ್ರಕೃತ, ಪ್ರಸಕ್ತವರ್ಷದಲ್ಲಿ ಅರ್ಧರಾತ್ರಿಯಲ್ಲಿ ನಕ್ಷತ್ರವಿರದಿದ್ದರೂ ತಿಥಿಯು "ಕರ್ಮಕಾಲವ್ಯಾಪ್ತಿ" ಹೊಂದಿದ್ದರಿಂದ ಕೃಷ್ಣಾಷ್ಟಮಿಗೆ ತಿಥಿಯೇ ಬಹು ಮುಖ್ಯವಾದ್ದರಿಂದ ಪೂರ್ವವಿದ್ಧವಾದರೂ ಪೂರ್ವದಿನವೇ ಆಚರಣೆಗೆ ಮುಖ್ಯಕಾಲವೆಂದು ನಿರ್ಣಯಿಸಲಾಗಿದೆ.

## ಶ್ರೀಕೃಷ್ಣಜಯಂತಿಯ ಬಗ್ಗೆ ಪಂಚರಾತ್ರಾಗಮದ ಆದೇಶ ೧

ವೈಷ್ಣವರಿಗೆ ಬಹುಮುಖ್ಯವಾದ ಪ್ರಮಾಣಗ್ರಂಥವಾದ ಪಂಚರಾತ್ರದಲ್ಲಿ ಪೂರ್ವವಿದ್ಧವಾದ ತಿಥಿಯೇ ಜಯಂತಿಗೆ ಪ್ರಶಸ್ತವೆಂದೆ ಹೇಳಲಾಗಿದೆ.

ಕೃಷ್ಣಜನ್ಮಾಷ್ಟಮಿ ಪ್ರೋಕ್ತಾ ಸೌಮ್ಯವಾರೇಣ ಸಂಯುತಾ ।

ರೋಹಿಣೀ ಸಹಿತಾ ಯತ್ರ ಶತವರ್ಷೇಣ ಲಭ್ಯತೆ ।

ಪರವಿದ್ಧಾ ನ ಕರ್ತವ್ಯಾ ಪೂರ್ವವಿದ್ಧಾ ಪ್ರಶಸ್ಯತೆ ।

ತಥಾಪಿ ವಕ್ಷ್ಯತೆ ಪುತ್ರ ನಿರ್ಣಯಂ ಚ ಯಥಾರ್ಥತ: ।

ಯಾ ತಿಥೀ ರೋಹಿಣೀಯುಕ್ತಾ ಸಾ ತಿಥಿ: ಪ್ರವರಾ ಮತಾ ।

ತಸ್ಯಾಮುಪೋಷಣಂ ಕಾರ್ಯಂ ತಿಥಿಭಾಂತೇ ಚ ಪಾರಣಮ್ ॥

—ಪಂಚರಾತ್ರ ಹಂಸಬ್ರಹ್ಮಸಂವಾದ।

ಇದರ ಭಾವ ಹೀಗಿದೆ.——ಬುಧವಾರದಿಂದ ಯುಕ್ತವಾದ ಕೃಷ್ಣಜನ್ಮಾಷ್ಟಮಿ ಪ್ರಶಸ್ತವಾದುದು. ಅದರಲ್ಲಿಯೂ ರೋಹಿಣೀಯುಕ್ತವಾಗಿದ್ದರೆ, ಅದು ಇನ್ನೂ ಪ್ರಶಸ್ತವಾದದ್ದು. ಇಂಥಯೋಗ ನೂರುವರ್ಷಕ್ಕೊಮ್ಮೆ ದೊರಕುವದು. ಪರವಿದ್ಧವಾದ ಅರ್ಥಾತ್ ನವಮಿವಿದ್ಧವಾದರೆ ಇಂಥ ತಿಥಿಯಂದು ಆಚರಿಸಕೂಡದು. ಸಪ್ತಮಿ ವಿದ್ಧವಾದ ತಿಥಿಯೇ ಪ್ರಶಸ್ತವಾದುದು.

ಪ್ರಕೃತದಲ್ಲಿ ಅಷ್ಟೊಂದು ವಾರನಕ್ಷತ್ರಗಳಯೋಗವಿದ್ದ ಪ್ರಾಶಸ್ತ್ಯವು ಇಲ್ಲದಿದ್ದರೂ ಕಡಿಮೆ ಪ್ರಶಸ್ತವಾದ ನಿಶೀಥತಿಥಿಯು ಲಭ್ಯವಿದ್ದು, ಅದು ಪೂರ್ವವಿದ್ಧವೂ ಆಗಿದ್ದರಿಂದ

(ಸಪ್ತಮಿ ವೇಧವುಳ್ಳದ್ದು ಆಗಿದ್ದರಿಂದ) ಈ ವರ್ಷ ಪೂರ್ವದಿನವಾದ ರವಿವಾರವೇ ಕೃಷ್ಣಾಷ್ಟಮಿ ಆಗುತ್ತದೆ.

ಮುಂದುವರೆದು ಪಂಚರಾತ್ರದಲ್ಲಿ ಇನ್ನೂ ಒಂದು ವಿಷಯವನ್ನು ಹೇಳಿ ನಿರ್ಣಯಿಸಲಾಗಿದೆ. ಅದರ ಭಾವ ಹೀಗಿದೆ. ಪೂರ್ವವಿದ್ಧವಾದ ವಾರನಕ್ಷತ್ರಗಳಿಂದ ಕೂಡಿದ ತಿಥಿಯು ಪ್ರಶಸ್ತವೆಂದು ಹೇಳಿದರೂ, ಹೇ ಪುತ್ರನಾದ ಬ್ರಹ್ಮನೇ ಅದರ ನಿರ್ಣಯವನ್ನು ಯಥಾರ್ಥವಾಗಿ ಹೇಳುತ್ತೇನೆ.

ಯಾವ ತಿಥಿಯು ರೋಹಿಣೀಯುಕ್ತವಾಗಿದೆಯೋ ಅರ್ಥಾತ್ ಕರ್ಮಕಾಲವಾದ ನಿಶೀಥದಲ್ಲಿ ಯಾವ ಅಷ್ಟಮಿ ತಿಥಿಯು ರೋಹಿಣಿ ನಕ್ಷತ್ರದಿಂದ ಕೂಡಿದ್ದರೆ, ಆ ತಿಥಿಯು ಅತ್ಯಂತ ಶ್ರೇಷ್ಠವಾದದ್ದು. ಆ ತಿಥಿಯಂದೇ ಉಪೋಷಣ ಮಾಡಿ, ತಿಥಿನಕ್ಷತ್ರಗಳೆರಡೂ ಕಳೆದ ನಂತರ ಪಾರಣ ಮಾಡತಕ್ಕದ್ದು.

ಈ ವಿಶೇಷವು ಪ್ರಸಕ್ತ ವರ್ಷದಲ್ಲಿ ಇಲ್ಲವಾದ ಕಾರಣ ನಿಶೀಥ ವ್ಯಾಪ್ತಿಯುಳ್ಳ ಅಷ್ಟಮಿ ಇದ್ದ ದಿನವೇ ಉಪೋಷಣ ಮಾಡಿ ತಿಥಿ ಮುಗಿದ ನಂತರ ಪಾರಣವನ್ನು ಮಾಡಲು ಪಂಚರಾತ್ರದ ಆದೇಶ ಎಂಬುದಾಗಿ ತಿಳಿಯತಕ್ಕದ್ದು.

ಒಟ್ಟಾರೆ : ೧) ಕರ್ಮಕಾಲಕ್ಕೆ ಅಷ್ಟಮಿ ಪ್ರಧಾನ.

೨) ರೋಹಿಣಿ ಯುಕ್ತವಾದರೇ ಪ್ರಶಸ್ತತರ

೩)ಅದೇ ಬುಧವಾರ ಯುಕ್ತವಾದರೆ ಪ್ರಶಸ್ತತಮ ಎಂಬುದಾಗಿ ತಿಳಿಯತಕ್ಕದ್ದು.

ಅಷ್ಟಮಿ ನಿಶೀಥಕ್ಕೆ ರೋಹಿಣಿ ಸಂಯೋಗವಿಲ್ಲದಿದ್ದಲ್ಲಿ ಹೇಗೆ ಆಚರಣೆ?

## ಪಂಚರಾತ್ರಾಗಮದ ಆದೇಶ-- ೨

ಕೇಚಿದ್ ವದಂತಿ ಮುನಯ; ಪ್ರಾತರೇವ ಹಿ ಪಾರಣಮ್ ।

ತೇಷಾಂ ಚಾಪಿ ಪ್ರವಕ್ಷ್ಯಾಮಿ ಅಭಿಪ್ರಾಯಂ ಚ ಹೃದ್ಗತಮ್ ।

ಅಷ್ಟಮೀ ಚ ಯದಾ ನ ಸ್ಯಾತ್ ಸಂಯೋಗಸ್ಥಾ ಚ ರೋಹಿಣಿ ।

ಪ್ರಾತ:ಕಾಲೇ ನವಮ್ಯಾಂ ತು ಪಾರಣಂ ತು ಯಥೋಚಿತಮ್ ।

ಇದರ ಅಭಿಪ್ರಾಯ- ಕೆಲವು ಮುನಿಗಳು ಪ್ರಾತ:ಕಾಲದಲ್ಲಿಯೇ ಪಾರಣ ಎಂದು ಹೇಳುತ್ತಾರೆ.

ಆ ಮುನಿಗಳ ಅಭಿಪ್ರಾಯವನ್ನು ಮತ್ತು ನನ್ನ ಹೃದ್ಗತವಾದ ವಿಚಾರವನ್ನು ಹೇಳುತ್ತೇನೆ.

ಅಷ್ಟಮೀ ನಿಶೀಥಕ್ಕೆ ಸಂಯುಕ್ತವಾದ ರೋಹಿಣಿ ಇರದಿದ್ದಲ್ಲಿ ಪ್ರಾತ:ಕಾಲಕ್ಕೆ ನವಮೀ ಇದ್ದರೆ ಪ್ರಾತ:ಕಾಲದಲ್ಲಿಯೇ ಪಾರಣ ಮಾಡಬೇಕು. ಪ್ರಾತ:ಕಾಲಕ್ಕೆ ನವಮೀ ಇರದಿದ್ದರೆ, ನವಮೀ ಯಾವಾಗ ಬರುತ್ತದೆಯೋ ಆಗ್ಗೆ ಯಥೋಚಿತವಾಗಿ ಪಾರಣೆಯನ್ನು ಮಾಡಬೇಕು.

ಇನ್ನು ಪ್ರಸಕ್ತ ವರ್ಷದಲ್ಲಿ ಅಷ್ಟಮೀ ನಿಶೀಥಕ್ಕೆ ರೋಹಿಣೀ ಸಂಯೋಗವಿಲ್ಲ.ಆದ ಕಾರಣ ಮರುದಿನ ಅಷ್ಟಮಿ ಮುಗಿದ ಮೇಲೆ ಪಾರಣ ಮಾಡುವದು ಉಚಿತವಾದದ್ದು.

## --ಭೃಗು ಸಂಹಿತಾ ವಾಕ್ಯ--

ಜನ್ಮಾಷ್ಟಮೀ ಜಯಂತೀ ಚ ಶಿವರಾತ್ರಿಸ್ತಥೈವ ಚ ।

ಪೂರ್ವವಿದ್ಧೈವ ಕರ್ತವ್ಯಾ ತಿಥಿಭಾಂತೇ ಚ ಪಾರಣಮ್ ॥

ಜನ್ಮಾಷ್ಟಮೀ ಆಗಲಿ, ಜಯಂತೀಯಾಗಲಿ ಹಾಗೂ ಶಿವರಾತ್ರಿಯಾಗಲಿ ಸಪ್ತಮೀ ವಿದ್ಧವಾದ ಅಷ್ಟಮೀಯಂದು (ರೋಹಿಣಿ ಸಂಯೋಗ ವಿದ್ದಲ್ಲಿ) ಆಗ್ಗೆ ತಿಥಿ ಮತ್ತು ನಕ್ಷತ್ರಗಳು ಕಳೆದ ಮೇಲೆ ಪಾರಣೆ. ಕೇವಲ ತಿಥಿ ನಿಶೀಥಕ್ಕಿದ್ದರೆ, ತಿಥ್ಯಂತೇ ಪಾರಣಂ  ಎಂಬುದಾಗಿ ಭೃಗು ವಾಕ್ಯದಿಂದ ತಿಳಿದು ಬರುತ್ತದೆ.

## --ಜಯಂತೀ ಕಲ್ಪವ್ಯಾಖ್ಯಾ--

ಶ್ರೀ ಸತ್ಯಪರಾಯಣತೀರ್ಥರು ಒಂದು ಪುಟ್ಟದಾದ ವ್ಯಾಖ್ಯಾನವನ್ನು ರಚಿಸಿದ್ದಾರೆ. ಈ ಗ್ರಂಥದಲ್ಲಿ ಹೇಳಿದಂತೆ ಇಂದಿಗೂ ಶ್ರೀಮಠದಲ್ಲಿ ಆಚರಣೆ ನಡೆಯುತ್ತಿದೆ. ಇಲ್ಲಿ ಶ್ರೀಮದಾಚಾರ್ಯರು ಉದಾಹರಿಸಿದ ಜಯಂತೀ ಬಗ್ಗೆ ಶ್ರೀ ಶ್ರೀಗಳವರು "ಅರ್ಧರಾತ್ರೆ ರೋಹಿಣ್ಯಾಂ ಸತ್ಯಾಂ ಯದಾ ಕೃಷ್ಣಾಷ್ಟಮೀ ಭವೇತ್ ತದಾ ಸಾ ತಿಥಿ: ಜಯಂತೀ ಪ್ರೋಕ್ತಾ ನಾಮ ಪ್ರಸಿದ್ಧಾ ।"  ಎಂದು ವ್ಯಾಖ್ಯಾನಿಸಿದ್ದಾರೆ. ಸಾ ತಿಥಿ: ಎಂದಿದ್ದರಿಂದ ಅರ್ಧರಾತ್ರಿಯ ತಿಥಿಯೇ ಪ್ರಧಾನ. ಆ ತಿಥಿಯೊಡನೇ ನಕ್ಷತ್ರದ ಸಂಯೋಗವಿದ್ದಾಗ ಜಯಂತೀ ಎಂದು ಕರೆಯಲಾಗಿದೆ. ಹಾಗೂ ಸ್ಕಾಂದ ವಚನವನ್ನು ಉದಾಹರಿಸಿದ್ದಾರೆ.

ಶ್ರಾವಣೆ ಬಹುಲೇ ಸಾ ತು ಸರ್ವಪಾಪ ಪ್ರಣಾಶಿನೀ ।

ಜಯಂ ಪುಣ್ಯಂ ಚ ಕುರುತೇ ಜಯಂತೀತ್ಯೇವ ತಾಂ ವಿದು: ॥ ಇತಿ

ಇದರಿಂದ ಶ್ರಾವಣ ಮಾಸದ ಕೃಷ್ಣಪಕ್ಷದಂದೇ ಆಚರಣೆಯು ಪ್ರಮಾಣ ಪ್ರಮಿತವಾದದ್ದು ಎಂದು ಸೂಚಿಸಿದ್ದಾರೆ. ಅಲ್ಲದೇ ಶ್ರೀಕೃಷ್ಣನು ಕಲಿಯುಗಕ್ಕೆ ಹತ್ತಿರದ ಅವತಾರವಾದದ್ದರಿಂದ ಮತ್ತು ಎಲ್ಲ ಪಾಪಗಳನ್ನು ಕರ್ಷಣ ಮಾಡುವದರಿಂದ ಎಲ್ಲ ಅವತಾರಗಳನ್ನು ಬಿಟ್ಟು ಕೃಷ್ಣಜಯಂತೀ ದಿನ ಉಪವಾಸ ಕಡ್ಡಾಯವೆಂದು ಭಾರದ್ವಾಜ ಸಂಹಿತೆಯ ಆಧಾರದಿಂದ ನಿರ್ಣಯಿಸಿದ್ದಾರೆ.

ನಿಶೀಥವೇ ಮುಖ್ಯ ಕರ್ಮಕಾಲವೆಂದು , ಆ ದಿನವೇ ಉಪವಾಸಕ್ಕೆ ಮುಖ್ಯಕಾಲವೆಂದು ಶ್ರೀಮದಾಚಾರ್ಯರು ಈ ಕೆಳಗಿನ ಶ್ಲೋಕವನ್ನು ಉದಾಹರಿಸಿದ್ದಾರೆ.

ಯಸ್ಯಾಂ ಜಾತೋ ಹರಿ: ಸಾಕ್ಷಾತ್ ನಿಶೀಥೇ ಭಗವಾನ್ನಜ: ।

ತಸ್ಮಾತ್ ತದ್ದಿನಮತ್ಯಂತಂ ಪುಣ್ಯಂ ಪಾಪಹರಂ ಪರಮ್ ॥

ಅಲ್ಲದೇ ಚಾತುರ್ಮಾಸ್ಯ ಕಲ್ಪದ ಅನೇಕ ವಾಕ್ಯಗಳನ್ನು ಉದಾಹರಿಸಿದ್ದಾರೆ.

ನಿಶೀಥವ್ಯಾಪಿನೀ ಯಾ ಸ್ಯಾತ್ ಸೈವೋಪೋಷ್ಯಾ$ಷ್ಟಮೀ ವ್ರತೇ ।

ದಿನದ್ವಯೇ ನಿಶೀಥೇ ಚ ವ್ಯಾಪಿನೀ ಸ್ಯಾತ್ ಯದಾಷ್ಟಮೀ ॥

ಪೂರ್ವಾಮುಪೋಷ್ಯ ಕುರ್ವೀತ ಪರೆದ್ಯು: ಪಾರಣಂ ನಿಶಿ ।

ನ ಹಿ ದೋಷಸ್ತದಾ ಪ್ರೋಕ್ತೋ ನಿಶೀಥೋತ್ತರ ಭೋಜನಮ್॥

ದಿನದ್ವಯೆ ಯದಾ ನ ಸ್ಯಾತ್ ನಿಶೀಥ ವ್ಯಾಪಿನೀ ತಿಥಿ: ।

ತದೋತ್ತರಾಮುಪವಸೇತ್ ಯತ: ಸುರ್ಯೋದಯಸ್ಪೃಶಾ ॥

ಇತ್ಯಾದಿ ಅನೇಕ ಪ್ರಮಾಣ ವಾಕ್ಯಗಳನ್ನು ಉದಾಹರಿಸಿ ಶ್ರೀಮಠದ ಶಿಷ್ಟಾಚಾರ ಸಂಪ್ರದಾಯವನ್ನು ತಿಳಿಸಿರುತ್ತಾರೆ.

## ಪುರಾಣಾಂತರ ವಾಕ್ಯಗಳಿಗೆ ಅರ್ಥಾಂತರ ಕಲ್ಪನೆ ಯುಕ್ತ.

ಸರ್ವಥಾ ಸಪ್ತಮೀಯುಕ್ತಾ ಸಂತ್ಯಾಜ್ಯಾ ಸರ್ವ ವೈಷ್ಣವೈ: ।

ಉಪೋಷ್ಯಾ ನವಮೀ ಯುಕ್ತಾ ತದುಕ್ತಂ ಪುಷ್ಕರೇ ಸ್ಫುಟಮ್ ॥

–ಪದ್ಮ ಪುರಾಣ.

ಇತ್ಯಾದಿ ಪ್ರಮಾಣಗಳು ಅಪವಾದವೆಂದು "ಸ್ಮೃತಿಕೌಸ್ತುಭ" ದಲ್ಲಿವಿವರಸಲಾಗಿದೆ.

ಉಕ್ತಶ್ಚೈಷೊಪವಾದೊ ವೈಷ್ಣವ ನಿಬಂಧ ಕರ್ತೃಭಿ: ನರಸಿಂಹಪರಿಚರ್ಯಾ ಕರ್ತೃಭಿ: ಎಂದು ನಿರ್ಣಯಿಸಲಾಗಿದೆ.

ಉದಯೇ ಚಾಷ್ಟಮೀ ಕಿಂಚಿನ್ನವಮೀ ಸಕಲಾ ಯದಿ

ಭವತೆ ಬುಧಸಂಯುಕ್ತಾ ಪ್ರಾಜಾಪತ್ಯರ್ಕ್ಷಸಂಯುತಾ

ಅಪಿ ವರ್ಷಶತೇನಾಪಿ ಲಭ್ಯತೆ ವಾಽಥವಾ ನವಾ

–ಸ್ಕಂದ ಪುರಾಣ

ಇಲ್ಲಿ ಹಿಂದಿನ ನಿಶೀಥಕ್ಕೆ ಅಷ್ಟಮಿ ಇರುವುದು. ಕಾರಣ ಉದಯ ಅಷ್ಟಮಿ ಇರುವವರೆಗೆ ಉಪವಾಸ ಮಾಡುವುದು ಅಲಭ್ಯ ಪುಣ್ಯ ಲಾಭ ಎಂದು ಅಭಿಪ್ರಾಯ. ಉತ್ಸವಾಂತೇ ಪಾರಣೆ ಯುಕ್ತವಲ್ಲ. ಈ ಕುರಿತು ಪ್ರಮಾಣಗಳನ್ನು "ತದ್ದಾನ ವಿಷಯಮ್" ಎಂಬುದಾಗಿ ವಿಧಾನ ಪಾರಿಜಾತದಲ್ಲಿ ಸಮಾಧಾನ ನೀಡಲಾಗಿದೆ.

# <u>ಧರ್ಮ ಸಿಂಧು</u>

"ಧರ್ಮ ಸಿಂಧು" ಗ್ರಂಥದಲ್ಲಿ ಹಾಗೂ ಇನ್ನಿತರ ಪ್ರಸಿದ್ಧ ಧರ್ಮಶಾಸ್ತ್ರ ಗ್ರಂಥಗಳಾದ, ಕಾಲಮಾಧವ, ಹೇಮಾದ್ರಿ, ಪುರುಷಾರ್ಥ ಚಿಂತಾಮಣಿ, ನಿರ್ಣಯಸಿಂಧು ಇತ್ಯಾದಿ ಗ್ರಂಥಗಳಲ್ಲಿ ಕೃಷ್ಣಾಷ್ಟಮೀ ಹಾಗೂ ಕೃಷ್ಣಜಯಂತಿಯ ಬಗೆಗೆ ಸಾಕಷ್ಟು ಪ್ರಮಾಣಗಳನ್ನು ನೀಡಿ ವಿವರಿಸಿದ್ದಾರೆ. ನಿಶೀಥಕ್ಕೆ ಅಷ್ಟಮೀ ಪ್ರಾಶಸ್ತ್ಯಾಭಿದಾಯಕವಾದ ವಚನಗಳನ್ನು ಹೇಳಿ ಇದೇ ಕೃಷ್ಣಾಷ್ಟಮಿಗೆ ಪ್ರಧಾನವೆಂದು ನಿರ್ಣಯಿಸಲಾಗಿದೆ. ಜಯಂತಿಗೆ ಅಷ್ಟಮೀ ಜೊತೆಗೆರೋಹಿಣಿ ಯೋಗ ವಿದ್ದಲ್ಲಿ ಅದನ್ನೇ  ಪ್ರಧಾನವೆಂದು ಪರಿಗಣಿಸಲಾಗಿದೆ. ಆದಾಗ್ಯೂ ಅಪ್ರಧಾನವಾದ ಅನೇಕ ಅನುಕಲ್ಪಗಳನ್ನು ಕೊಟ್ಟು  ಜಯಂತೀ/ಜನ್ಮಾಷ್ಟಮಿಯ ಗೌಣ ಪ್ರಭೇದಗಳೆಂದು ಪರಿಗಣಿಸಿರುತ್ತಾರೆ.ಆದರೆ ಪ್ರಧಾನಯೋಗವನ್ನು ಮಾತ್ರ ಅಂಗೀಕರಿಸಿ ಶ್ರೀಮದಾಚಾರ್ಯರು ಜಯಂತೀ ನಿರ್ಣಯವನ್ನು ಮಾಡಿದ್ದಾರೆ.ಇದನ್ನೇ ಶ್ರೀಮಠದಲ್ಲಿ ಅನುಕರಿಸುತ್ತಾ ಬಂದಿದ್ದಾರೆ. ಆದರೂ ಈ ಅನುಕಲ್ಪಗಳನ್ನು ವಿವೇಚಿಸಿದಾಗ ಪ್ರಧಾನ ಕಲ್ಪಕ್ಕೆ ಬಾಧೆ ಬರದಂತೆ ಯೋಜಿಸಬಹುದು. ಧರ್ಮಸಿಂಧುವಿನಲ್ಲಿ ಪ್ರತೀ ಅನುಕಲ್ಪಗಳಿಗೂ ಉದಾಹರಣೆ  ಸಹಿತವಾಗಿ ಪ್ರತಿಪಾದನೆ ಮಾಡಲಾಗಿದೆ. ಅದರಂತೆ ಪ್ರಸಕ್ತ ವರ್ಷಕ್ಕೆ ಹೋಲಿಸಿ , ಯಾವ ಅನುಕಲ್ಪದಲ್ಲಿ ಬರಬಹುದೆಂದು ವಿಚಾರಿಸೋಣ.

ಆ ಪ್ರಕಾರ ಅಷ್ಟಮಿಯು ಶುದ್ಧ ಹಾಗೂ ವಿದ್ಧವೆಂದು ಎರಡು ವಿಧ.ದಿವಾರಾತ್ರಿ ಸಪ್ತಮಿ ಯೋಗವಿರದೇ ಸೂರ್ಯೋದಯದಿಂದ ಮಧ್ಯರಾತ್ರಿ ಪ್ರರ್ಯಂತ ಅಷ್ಟಮಿ ಇದ್ದರೆ ಅದು ಶುದ್ಧಾಷ್ಟಮಿ. ಹಗಲು ಮತ್ತು ಅರ್ಧರಾತ್ರಿಗಿಂತ ಮೊದಲು ಸಪ್ತಮಿ ಇದ್ದರೆ ಅದು ವಿದ್ಧಾಷ್ಟಮಿ. ಪ್ರಕೃತದಲ್ಲಿ ವಿದ್ಧಾಷ್ಟಮಿ ಯಾಗಿರುತ್ತದೆ.  ಈ ವಿದ್ಧಾಷ್ಟಮಿಯೂ ರೋಹಿಣಿ ಯುಕ್ತವಾದದ್ದು ಅಥವಾ ರೋಹಿಣೀ ರಹಿತವಾದದ್ದು. ಕೇವಲಾಷ್ಟಮೀ ಪ್ರಕೃತಕ್ಕೆ ವಿದ್ಧಾಷ್ಟಮಿಯಾಗಿದ್ದು ರೋಹಿಣೀರಹಿತವಾಗಿದ್ದರಿಂದ ಕೇವಲ ಅಷ್ಟಮೀ ಆಗಿರುತ್ತದೆ.ಕಾರಣ ಶುದ್ಧಾಷ್ಟಮಿಯ ವಿಕಲ್ಪಗಳು ಪ್ರಕೃತಕ್ಕೆ  ಅನ್ವಯಿಸುವದಿಲ್ಲ.

ಇನ್ನು ಕೇವಲಾಷ್ಟಮಿಯಲ್ಲಿ ನಾಲ್ಕು ವಿಧಗಳು --

೧) ಪೂರ್ವದಿನವೇ ನಿಶೀಥಿ ವ್ಯಾಪಿನೀ. ಪೂರ್ವಾ ಏವ।

೨) ಪರ ದಿನವೇ ನಿಶೀಥ ವ್ಯಾಪಿನಿ. ಪರಾ ಏವ.

೩) ದಿನದ್ವಯಗಳಲ್ಲಿಯೂ ನಿಶೀಥ ವ್ಯಾಪಿನಿ. ಪರಾ ಏವ.

೪) ದಿನದ್ವಯಗಳಲ್ಲಿಯೂ ನಿಶೀಥ ವ್ಯಾಪ್ತಿಯಿರದೇ ಇದ್ದದ್ದು. ಪರಾ ಏವ.

ಇಲ್ಲಿ ಕರ್ಮಕಾಲವಾದ ನಿಶೀಥಕ್ಕೆ ಅಷ್ಟಮಿ ಇರುವದೇ ಪ್ರಧಾನವಾದ್ದರಿಂದ ಮೊದಲಿನ ಎರಡು ವಿಧಗಳಲ್ಲಿ ವಿವಾದವಿಲ್ಲ. ಆದರೇ ಮೂರನೇಯ ವಿಧದಲ್ಲಿ ಭಿನ್ನಾಭಿಪ್ರಾಯವಿದೆ. ಎರಡೂ ದಿನ ನಿಶೀಥಕ್ಕೆ ತಿಥಿ ಇದ್ದಾಗ, ಮೊದಲನೇಯ ದಿನ ಉಪವಾಸ ಮಾಡಿ ಮರುದಿನವೂ ಉಪವಾಸ ಮಾಡಿ ತಿಥ್ಯಂತೇ ಪಾರಣ ಮಾಡಬೇಕೆಂದು ಚಾತುರ್ಮಾಸ್ಯ ಕಲ್ಪದ ವಾರಾಹ ವಚನದ ಆದೇಶವಿರುತ್ತದೆ. ಇನ್ನು ಎರಡೂ ದಿನ ನಿಶೀಥಕ್ಕೆ ಅಷ್ಟಮೀ ಇರದಿದ್ದರೇ ಈ ಪಕ್ಷದಲ್ಲಿ ವಿವಾದವಿರುವದಿಲ್ಲ. ಏಕೆಂದರೆ ಪರದಿನದ ಅಷ್ಟಮೀ ಸೂರ್ಯ ಉದಯದಿಂದ ಇರುವದರಿಂದ ಪರದಿನವೇ ಗ್ರಾಹ್ಯ ಎಂಬುದು ಸಮ್ಮತ.

ಪ್ರಕೃತ ವರ್ಷದಲ್ಲಿ ಪೂರ್ವದಿನವೇ ನಿಶೀಥವ್ಯಾಪಿನಿ ಆಗಿದ್ದರಿಂದ ನಂತರದ ಮೂರು ವಿಕಲ್ಪಗಳು ಅನ್ವಯಿಸುವದೇ ಇಲ್ಲ. ಪೂರ್ವದಿನ ಸಪ್ತಮೀ ೩೮– ಪಳ,೪೩– ಘಳಿಗಿ ಇದ್ದು ನಂತರ ಅಷ್ಟಮೀ ನಿಶೀಥವ್ಯಾಪಿನಿ ಆಗುತ್ತದೆ. ಮರುದಿನ ಅಷ್ಟಮೀ ೪೩_ ಪ ೫೪_ಘ ಇದ್ದು, ನಿಶೀಥಕ್ಕೆ ಇರುವದಿಲ್ಲ. ಕಾರಣ ಮೊದಲನೇಯ ಪಕ್ಷದಂತೆ, ಪೂರ್ವ ದಿನವೇ ಕೃಷ್ಣಾಷ್ಟಮಿ ಯುಕ್ತವಾಗಿದೆ. ನಿಶೀಥಿವ್ಯಾಪ್ತಿಯ ಲಕ್ಷಣವನ್ನು ವಿವರಿಸುತ್ತ, ಸಪ್ತಮೀ ರಾತ್ರಿ ಪೂರ್ವಾರ್ಧ ಮುಗಿಯುವ ಹೊತ್ತಿನಲ್ಲಿ ಒಂದು ಕಲೆಯಾದರೂ ಅಷ್ಟಮಿ ಇದ್ದರೆ ಅದು ನಿಶೀಥವ್ಯಾಪಿನಿ ತಿಥಿ. ಅದರಂತೆ ರಾತ್ರಿಯ ಉತ್ತರಾರ್ಧ ಭಾಗದಲ್ಲಿ ಒಂದು ಕಲೆಯಾದರೂ ಅಷ್ಟಮಿ ಇದ್ದು, ಮುಂದೆ ನವಮಿ ಬರುತ್ತಿದ್ದರೆ ಅದೂ ಕೂಡ ನಿಶೀಥವ್ಯಾಪಿತ್ವವು.

## ರೋಹಿಣಿಯುತ – ಅಷ್ಟಮಿ –

ಇದರಂತೆ ರೋಹಿಣಿಯುತ ಅಷ್ಟಮಿಯನ್ನು ತಿಳಿದುಕೊಳ್ಳಬೇಕೆಂದು ಹೇಳಿದ್ದಾರೆ.

೧) ಪೂರ್ವ ದಿನದ ನಿಶೀಥದಲ್ಲಿಯೇ, ತಿಥಿನಕ್ಷತ್ರಗಳ ಯೋಗ. ಪೂರ್ವ ದಿನೇ ಏವ ।

೨) ಪರದಿನದಲ್ಲಿಯೇ ನಿಶೀಥಕ್ಕೆ ತಿಥಿನಕ್ಷತ್ರಗಳ ಯೋಗ. ಪರದಿನೇ ಏವ ।

೩) ದಿನದ್ವಯಗಳಲ್ಲಿ ನಿಶೀಥಕ್ಕೆ ಅವುಗಳ ಯೋಗ. ಪರದಿನೇ ಏವ ।

ಈ ಮೇಲಿನ ಮೂರು ಪಕ್ಷಗಳಲ್ಲಿ ವಿವಾದವಿರುವದಿಲ್ಲ. ಇವು ಜಯಂತೀ ಸಂದರ್ಭದಲ್ಲಿ ಇರುವ ಯೋಗಗಳು. ಕಾರಣ ಪ್ರಕೃತವರ್ಷದಲ್ಲಿ ಕೇವಲ ಅಷ್ಟಮೀ ಇದ್ದದ್ದರಿಂದ ಪ್ರಕೃತಕ್ಕೆ ಮೇಲಿನ ಮೂರು ಅನ್ವಯಿಸುವದಿಲ್ಲ. ಇನ್ನು ರೋಹಿಣಿಯುತ ಅಷ್ಟಮಿಯು ದಿನದ್ವಯಗಳಲ್ಲಿಯೂ ನಿಶೀಥಕ್ಕೆ ರೋಹಿಣಿ ಇಲ್ಲದೇ ಇರುವಲ್ಲಿ, ಅನೇಕ ಅನುಕಲ್ಪಗಳಾಗುತ್ತವೆ.

ಅಲ್ಲಿ ಒಟ್ಟು ೮ ನುಕಲ್ಪಗಳನ್ನು ಉದಾಹರಣೇ ಸಹಿತವಾಗಿ ವಿವರಿಸಿದ್ದಾರೆ.

ಆದರೆ, ಪ್ರಕೃತಕ್ಕೆ ಆ ೮ ಅನುಕಲ್ಪಗಳೂ ಅನ್ವಯವಾಗುವದಿಲ್ಲ. ಏಕೆಂದರೆ ಪ್ರಸಕ್ತವರ್ಷ ಪರದಿನದ ನಿಶೀಥಕ್ಕೂ ರೋಹಿಣಿ ಇರುತ್ತದೆ. ಅದರೆ ತಿಥಿ ಇರುವದಿಲ್ಲ.

ಇದೇ ರೀತಿ ಅನೇಕ ಧರ್ಮಶಾಸ್ತ್ರಗಳಲ್ಲಿ ಅನೇಕ ಅನುಕಲ್ಪಗಳನ್ನು ತೋರಿಸಿದ್ದಾರೆ.

ಆದರೆ ಶಿಷ್ಟಾಚಾರ ಸಂಪ್ರದಾಯಕ್ಕೆ ಅನುಗುಣವಾಗಿದ್ದರೆ ಮಾತ್ರ ಗ್ರಾಹ್ಯ ಇಲ್ಲವಾದರೆ ಇಲ್ಲ.

ಈ ಎಂಟು ಅನುಕಲ್ಪಗಳಲ್ಲಿ ೧, ೨, ೫, ಇವುಗಳಲ್ಲಿ ವಿವಾದವಿಲ್ಲ. ಏಕೆಂದರೆ, ಇವು ಕೃಷ್ಣಾಷ್ಟಮೀ ಪ್ರಭೇಧಗಳಲ್ಲಿ ಸೇರಿವೆ. ಹಾಗೂ ೭ ನೇಯ ಅನುಕಲ್ಪ ಜಯಂತೀ ಪ್ರಭೇಧದಲ್ಲಿ ಸೇರಿದ್ದರಿಂದ ಇಲ್ಲಿಯೂ ವಿವಾದವಿರುವದಿಲ್ಲ. ಆದರೆ ಅನುಕಲ್ಪ ೩, ೪ ಇವುಗಳಲ್ಲಿ ವಿವಾದವಿರುತ್ತದೆ. ಏಕೆಂದರೆ ಇವುಗಳಿಗೆ ಚಾತುರ್ಮಾಸ್ಯ ವರಾಹ ಪುರಾಣ ಹಾಗೂ ಪಂಚರಾತ್ರಾಗಮ ಮುಂತಾದ ಆಧಾರಗಳ ವಿರೋಧವಿದೆ. ಅದರಂತೆ ಅನುಕಲ್ಪ ೬ ಹಾಗೂ ೮ ಇವುಗಳಲ್ಲಿ ವಿವಾದವಿದೆ. ಕಾರಣ ಇಂತಹ ಸ್ಥಳಗಳಲ್ಲಿ ಶಿಷ್ಟಾಚಾರಕ್ಕೆ ಅನುಗುಣವಾದ ಆಧಾರಪ್ರಮಾಣಗಳಿಗೆ ಯುಕ್ತವಾಗುವ ರೀತಿಯಿಂದ ನಿರ್ಣಯ ಮಾಡಿಕೊಳ್ಳತಕ್ಕದ್ದು.

# ಶ್ರೀಕೃಷ್ಣಾಚಾರ್ಯ ಸ್ಮೃತಿಮುಕ್ತಾವಲೀ

ಈ ಗ್ರಂಥದಲ್ಲಿಯೂ ಅನೇಕ ಸಾಧಕ ಪ್ರಮಾಣಗಳನ್ನು ಕೊಟ್ಟು ಪ್ರತಿಪಾದಿಸಲಾಗಿದೆ. ಇಲ್ಲಿಯೂ ಜನ್ಮಾಷ್ಟಮಿ ಶುದ್ಧವಿದ್ಧಗಳೆಂದು ಎರಡು ವಿಧಗಳನ್ನು ವಿವರಿಸಿದ್ದಾರೆ. ಇಲ್ಲಿ ರಾತ್ರಿವೇಧವನ್ನು ಜಾಬಾಲಿವೃದ್ಧಗೌತಮರ ವಾಕ್ಯಗಳನ್ನು ಉದಾಹರಿಸಿ ಸಮರ್ಥಿಸಿದ್ದಾರೆ.

ಅಹಸ್ಸು ತಿಥಯಃ ಪುಣ್ಯಾಃ ಕರ್ಮಾನುಷ್ಠಾನತೋ ದಿವಾ ।

ನಕ್ತಾದಿವ್ರತಯೋಗೇಷು ರಾತ್ರಿಯೋಗಃ ಪ್ರಶಸ್ಯತೆ ॥

ಎಂಬುದಾಗಿ ಇಲ್ಲಿ ಸಂಪೂರ್ಣ ರಾತ್ರಿಯೋಗವು ಮುಖ್ಯ.

ಕೃಷ್ಣಾಷ್ಟಮಿ ಶ್ರಾವಣೇ ತು ಪ್ರದೋಷ ಸಹಿತಾಷ್ಟಮಿ।

ಜನ್ಮಾಷ್ಟಮಿ ಭವೇತ್ ಸೈವ ಜಯಂತೀ ರೋಹಿಣಿಯುತಾ ॥

_ಸ್ಕಾಂದ ಪುರಾಣ.

ಪ್ರದೋಷಾದಿ ಸಂಪೂರ್ಣ ರಾತ್ರಿಯೋಗ ದೊರಕದಿದ್ದರೆ ಅರ್ಧರಾತ್ರಿ ಯೋಗವು ಗ್ರಾಹ್ಯ. ಇಲ್ಲಿಯೂ ಕೂಡ ವಸಿಷ್ಠ ಸಂಹಿತೆ ,ವಿಷ್ಣುರಹಸ್ಯ ಯೋಗಿಶ್ವರರ ವಾಕ್ಯಗಳನ್ನು ಉದಾಹರಿಸಿದ್ದಾರೆ. ಶುದ್ಧಾಷ್ಠಮಿ ವಿಷಯದಲ್ಲಿ ಸಂದೇಹವೇ ಇಲ್ಲ.ಆಗ ಪೂರ್ವ ದಿನವೇ ಗ್ರಾಹ್ಯ. ವಿದ್ಧಾಷ್ಟಮಿಯಲ್ಲಿ ಪೂರ್ವನಿಶೀಥಕ್ಕೆ, ಪರನಿಶೀಥಕ್ಕೆ ,ಉಭಯ ನಿಶೀಥಕ್ಕೆ ಅಷ್ಟಮಿ. ಅಲ್ಲದೇ ಉಭಯ ನಿಶೀಥಕ್ಕೆ ಅಷ್ಟಮಿ ಇಲ್ಲದಿರುವದು ಹೀಗೆ ನಾಲ್ಕು ವಿಧವೆಂದು ಹೇಳಿದ್ದಾರೆ.

ಪೂರ್ವ ನಿಶೀಥಕ್ಕೆ ಅಷ್ಟಮಿ ಇದ್ದಾಗ ಪೂರ್ವದಿನವೇ ಗ್ರಾಹ್ಯ ಎಂಬುದು ಸ್ಪಷ್ಟ. ಅದರಂತೆ ಪರನಿಶೀಥಕ್ಕೆ ಅಷ್ಟಮಿ ಇದ್ದಾಗ ಪರದಿನವೇ ಗ್ರಾಹ್ಯ ಎಂಬುದು ಸ್ಪಷ್ಟ. ಇನ್ನು ಉಭಯ ನಿಶೀಥಕ್ಕೆ ಅಷ್ಟಮಿ ಇದ್ದಾಗ ಸಂಕಲ್ಪ ಕಾಲದಿಂದ ಆರಂಭಿಸಿ ನಿಶೀಥದವರೆಗೆ ತಿಥಿವ್ಯಾಪ್ತಿ ದೊರಕುವದರಿಂದ ಪರದಿನವೇ ಕೃಷ್ಣಾಷ್ಟಮಿ ಆಚರಣೆ ಗ್ರಾಹ್ಯ.

ಅರ್ಧರಾತ್ರದ್ವಯವ್ಯಾಪ್ತ್ಯಾ ಯದಿ ಯುಕ್ತಾಷ್ಟಮೀ ಭವೇತ್ ।

ಪರೈವೋಪೋಷಣಂ ಕುರ್ಯಾತ್ ಜಾಗರಂ ವಿಷ್ಣು ಪೂಜನಮ್ ॥

——ಸ್ಕಾಂದೇ.

ಕೃಷ್ಣಾಷ್ಟಮೀ ಶ್ರಾವಣೇ ತು ಮಹಾನಿಶಿ ಸಮನ್ವಿತಾ ।

ಜನ್ಮಾಷ್ಟಮೀ ತು ಸಾ ಜ್ಞೇಯಾ ಮಹಾಪಾತಕನಾಶಿನೀ ॥

ದಿನದ್ವಯೇಽರ್ಧ ರಾತ್ರೇ ತು ಕೃಷ್ಣಜನ್ಮವ್ರತೇ ಪರಾ ।

—— ಸಾಗರ ಸಂಹಿತಾ.

ಅರ್ಧರಾತ್ರಿಸ್ಪರ್ಶಿನೀ ಸ್ಯಾತ್ ಅಷ್ಟಮೀ ತು ದಿನದ್ವಯೇ ।

ನವಮೀಸಂಯುತಾ ಕಾರ್ಯಾ ಪ್ರದೋಷಾದಿ ವಿಶೇಷಣಾತ್ ॥

—— ತ್ರಿಕಾಂಡಮಂಡನ.

ಈ ವಿಷಯದಲ್ಲಿ ಚಾತುರ್ಮಾಸ್ಯ ವರಾಹಕಲ್ಪದ ವಿರೋಧ ಬರುವದರಿಂದ ಮೇಲಿನ ವಾಕ್ಯಗಳಿಗೆ ಅರ್ಥಾಂತರ ಕಲ್ಪನೆ ಸೂಕ್ತ.ಮೇಲಿನ ಸ್ಕಾಂದ ಪುರಾಣದಲ್ಲಿ ಯುಕ್ತಾಷ್ಟಮೀ ಎಂಬುದಕ್ಕೆ ರೋಹಿಣೀಯುಕ್ತಾಷ್ಟಮೀ ಎಂದು ಗ್ರಹಿಸಿ, ಇದು ಜಯಂತೀ ವಿಷಯವೆಂದು ತಿಳಿದಾಗ ವಿರೋಧವಿಲ್ಲ. ಅದರಂತೆ ಸಾಗರ ಸಂಹಿತೆಯಲ್ಲಿ ಕೃಷ್ಣಜನ್ಮವ್ರತೆ ಎಂದಿದ್ದರಿಂದ ಇದು ಕೂಡ ಜಯಂತೀ ವಿಷಯವೆಂದಾಗ ವಿರೋಧವಿಲ್ಲ. ಅದರಂತೆ ಇವುಗಳ ಅನುಸಾರವಾಗಿ ತ್ರಿಕಾಂಡಮಂಡನ ವಾಕ್ಕಯಕ್ಕೂ ಜಯಂತೀ ಪರ ಎಂದಾಗ ವಿರೋಧವಿಲ್ಲ. ಇಲ್ಲದಿದ್ದರೆ ತಿಥ್ಯಂತೆ

ಪಾರಣಂ ಎಂಬುದಕ್ಕೆ ಅರ್ಥಹೀನತೆ ಬಂದೀತು. ಮೊದಲದಿನ ನಿಶೀಥಕ್ಕೆ ಅಷ್ಟಮಿ ಇದ್ದರೂ ಅದನ್ನು ಕೈಬಿಡಬೇಕಾದ ಪ್ರಸಂಗ ಬರುತ್ತದೆ. ಇನ್ನು ನಾಲ್ಕನೇ ವಿಧದಲ್ಲಿ ಪರದಿನವೇ ಉಪವಾಸವೆಂದಿದ್ದಾರೆ.

ಅರ್ಧರಾತ್ರಿ ದ್ವಯಂ ಹಿತ್ವಾ ಯದಿ ಶುದ್ಧಾ ಸಮಾಭವೇತ್ ।

ಪರ್ಯೈವೋಪೋಷಣಂ ಕುರ್ಯಾತ್ ವಿಷ್ಣು ಪೂಜಾಂ ಚ ಜಾಗರಮ್ ॥

--ಸಾಗರ ಸಂಹಿತಾ

ದಿನದ್ವಯೇऽರ್ಧರಾತ್ರೇ ತು ಯದಾ ಕೃಷ್ಣಾಷ್ಟಮೀ ನ ಚೇತ್ ।

ಪ್ರದೋಷವ್ಯಾಪಿನೀ ಗ್ರಾಹ್ಯಾ ಕೃಷ್ಣಜನ್ಮವ್ರತೇ ಪರಾ ॥

ಈ ವಿಷಯದಲ್ಲಿ ವಿವಾದವಿರುವದಿಲ್ಲ. ಇದು ಸರ್ವಸಮ್ಮತ.

ಹೀಗೆ ಈ ನಾಲ್ಕು ಕೃಷ್ಣಾಷ್ಟಮಿಯ ಅನುಕಲ್ಪಗಳಲ್ಲಿ ಮೊದಲನೆಯ ಅನುಕಲ್ಪವೇ ಪ್ರಸಕ್ತವರ್ಷಕ್ಕೆ ಸಂಬಂಧಿಸಿದ್ದರಿಂದ ಮೊದಲ ದಿನವೇ ಕೃಷ್ಣಾಷ್ಟಮೀ ಹಾಗೂ ಮರುದಿನ ತಿಥ್ಯಂತೇ ಪಾರಣಾ ಎಂಬ ನಿರ್ಣಯವು ಸ್ಮೃತಿಮುಕ್ತಾವಳಿಕಾರರಿಗೆ ಸಮ್ಮತವಾದದ್ದು.

ಇನ್ನು ಜಯಂತೀ ವಿಷಯಕ ಅನೇಕ ಕಲ್ಪಗಳಲ್ಲಿ ಮೇಲೆ ಉದಾಹರಿಸಿದ, ಪಂಚರಾತ್ರಾಗಮ, ಚಾತುರ್ಮಾಸ್ಯಕಲ್ಪ ವರಾಹಪುರಾಣ, ಭೃಗುಸಂಹಿತೆ,ವಿಷ್ಣುಧರ್ಮೋತ್ತರಪುರಾಣ ಹಾಗೂ ಇನ್ನಿತರ ವೈಷ್ಣವಸಮ್ಮತ ಆಧಾರಗಳಿಗೆ ಅನುಕೂಲವಾದ ಪ್ರಮಾಣಗಳಿಗೆ ಅನುಕೂಲವಾಗಿದ್ದಲ್ಲಿ ಆ ಅನುಕಲ್ಪಗಳು ಗ್ರಾಹ್ಯ.

<u>ಉಪಸಂಹಾರ</u> : ಅನೂಚಾನ ಸಂಪ್ರದಾಯಕ್ಕೆ ಯುಕ್ತವಾದ ಪ್ರಮಾಣಗಳಿಗೆ ಅನುಸಾರಿಯಾಗಿ ನಿರ್ಣಯ ಮಾಡಿದ್ದರಿಂದ ಈ ವರ್ಷ ರವಿವಾರ ಕೃಷ್ಣಾಷ್ಟಮೀ ಹಾಗೂ ಸೋಮವಾರ ರಾತ್ರಿ ಅಷ್ಟಮೀ ಕಳೆದನಂತರ ಪಾರಣೇ.